# ಚಿನ್ನದ ನಾಣ್ಯ

ಲೇಃ ಅಲ್ಮಾ ಫ್ಲೋರ್ ಅಡಾ

ಚಿತ್ರಗಳುಃ ನೇಲ್ ವಾಲ್ಡಮನ್

ಕನ್ನಡಕ್ಕೆಃ ಪ್ರಭಾಕರ ನಾನಾವಟಿ



ಜುಆನ್ ಬಹಳ ವರುಷಗಳಿಂದ ಕಳ್ಳತನ ಮಾಡಿಯೇ ಜೀವಿಸುತ್ತಿದ್ದನು. ರಾತ್ರಿಯೆಲ್ಲ ಕಳ್ಳತನ ಮಾಡುತ್ತಿದ್ದರಿಂದ ಅವನ ಮೈದೊಗಲು ಬೇನೆ ಬಿದ್ದವರಂತೆ ಕಳೆಗುಂದಿ ಹೋಗಿತ್ತು. ತನ್ನ ಕಳ್ಳತನದ ವೇಳೆಯಲ್ಲಿ ಅಡಗುತ್ತ ಮತ್ತು ಕದ್ದು ಹೋಗುತ್ತ ಇದ್ದದ್ದರಿಂದ ಅವನ ಶರೀರವೆಲ್ಲ ಮುದುಡಿ ಬಗ್ಗಿ ಹೋಗಿತ್ತು. ಆತನಿಗೆ ಯಾರೂ ಗೆಳೆಯರು ಮತ್ತು ನೆಂಟರು ಇರಲಿಲ್ಲ. ಹೀಗಾಗಿ ಆತನು ಎಂದಿಗೂ ನಕ್ಕಿರಲಿಲ್ಲ. ಮುಖ ಯಾವಾಗಲೂ ಅಂಕು-ಡೊಂಕಾಗಿ ಸಿಟ್ಟಿನಲ್ಲಿ ಇದ್ದವರಂತೆ ಕಾಣುತ್ತಿತ್ತು.

ಒಂದು ರಾತ್ರಿ ಒಂದು ಗುಡಿಸಲಿನಿಂದ ಗಿಡಗಂಟಿಗಳ ಸಂದಿಯಿಂದ ಬೆಳಕು ಹೊರಬರುತ್ತಿದ್ದದ್ದನ್ನು ಜುಆನ್ ಕಂಡನು. ಬಾಗಿಲು ಸಂದಿಯಿಂದ ಇಣಿಕಿ ನೋಡಿದಾಗ ಟೇಬಲ್ಲಿನ ಎದುರಿಗೆ ಮುಪ್ಪಾನು ಮುದುಕಿ ಕುಳಿತಿದ್ದದ್ದನ್ನು ಆತ ನೋಡಿದನು. .

ಅವಳ ಅಂಗೈಯಲ್ಲಿ ಏನು ಹೊಳೆಯುತ್ತಿದೆ? ಜುಆನ್ ಗೆ ಅಚ್ಚರಿಯಾಯಿತು. ಅವನು ತನ್ನ ಕಣ್ಣುಗಳನ್ನೇ ನಂಬಲಿಲ್ಲ. ಅದು ಚಿನ್ನದ ನಾಣ್ಯ. "ನಾನೇ ಈ ಜಗತ್ತಿನಲ್ಲಿ ಹೆಚ್ಚು ಸಿರಿವಂತಳು" ಎಂದು ಅವಳು ಒಟಗುಡಿಸುತ್ತಿರುವದು ಅವನಿಗೆ ಕೇಳಿಸಿತು.

ಜುಆನ್ ಈ ಮುದುಕಿಯ ಎಲ್ಲ ಚಿನ್ನವನ್ನು ದೋಚಬೇಕು ಎಂದು ತೀರ್ಮಾನಿಸಿದನು. ಅವಳು ಹೊರಬಿದ್ದಮೇಲೆ ಕನ್ನ ಹಾಕುವದು ಸುಲಭ ಎಂದು ಅವನು ಯೋಚಿಸಿದನು. ಜುಆನ್ ಅಲ್ಲಿಯೇ ಗಿಡಗಂಟಿಗಳಲ್ಲಿ, ಮುಂದೆ ಬಂದ ತನ್ನ ಬೊಜ್ಜಾದ ಹೊಟ್ಟೆಯನ್ನು ಹೇಗೋ ಮುದ್ದೆ ಮಾಡುತ್ತ ಸರಿಯಾದ ವೇಳೆಗಾಗಿ ಗುಡಿಸಲಿನಲ್ಲಿ ಒಳಹೋಗಲು ಕಾಯುತ್ತ ಕುಳಿತುಕೊಂಡನು.

ಜುಆನ್ ಅರೆನಿದ್ದೆಯಲ್ಲಿದ್ದಾಗ ಬಾಗಿಲು ಬಡೆದ ಸಪ್ಪಳ ಕೇಳಿಸಿತು. ಕೆಲ ನಿಮಿಷಗಳ ಮೇಲೆ ಆತ ಎದ್ದು ನೋಡಿದಾಗ ಕಪ್ಪು ಬಟ್ಟೆಯಲ್ಲಿ ಮೈಸುತ್ತಿಕೊಂಡ ಮುದುಕಿ ಇಬ್ಬರು ಗಂಡಸರ ಜತೆ  ಹೊರಬಿದ್ದದ್ದು ಅವನಿಗೆ ಕಂಡಿತು.

ಇದೇ ಒಳ್ಳೆಯ ಸಂಧಿ! ಎಂದು ಒಟಗುಡುತ್ತ ಗುಡಿಸಲಿನ ಕಿಟಕಿಯನ್ನು ಬಲವಾಗಿ ನೂಕಿ ಖಾಲಿ ಇದ್ದ ಗುಡಿಸಲಿನಲ್ಲಿ ಕಾಲಿಟ್ಟನು.



ಆತನು ಚಿನ್ನದ ನಾಣ್ಯಗಳನ್ನು ಹುಡುಕತೊಡಗಿದನು. ಅವು ಕಾಣಲಿಲ್ಲ. ಕಪಾಟಿನಲ್ಲಿ ಇಣಿಕಿ ನೋಡಿದನು. ಅಲ್ಲಿಯೂ ಇರಲಿಲ್ಲ. ಅವು ಎಲ್ಲಿರಬೇಕು? ಎದೆಗುಂದುತ್ತ ಆತ ಮಾಳಿಗೆಯ ಮೇಲಿನ ಹುಲ್ಲನ್ನು ಚೆಲ್ಲಾಪಿಲ್ಲಿ ಮಾಡುತ್ತ ಚಿನ್ನವನ್ನು ಹುಡುಕತೊಡಗಿದನು. ಅವೆಲ್ಲಿಯೂ ದೊರೆಯಲಿಲ್ಲ.

ಈ ಗುಡಿಸಲಿನಲ್ಲಿ ಚಿನ್ನವೇ ಇಲ್ಲ.ಎಂದು ಮನಗಾಣಿಸಿ ಕೊನೆಗೆ ಆತ ಸುಮ್ಮನೆ ಕುಳಿತನು ಆ ಮುದುಕಿಯನ್ನು ಹುಡುಕಿ ಅವಳನ್ನೇ "ಚಿನ್ನವನ್ನು ಎಲ್ಲಿ ಮುಚ್ಚಿಟ್ಟಿರುವಿ? ಎಂಬುದನ್ನು ಕೇಳುವ" ಎಂದು ಅವನು ಠರಾಯಿಸಿದನು.

ಆ ಮುದುಕಿ ಮತ್ತು ಅವಳ ಸಂಗಡಿಗರು ಹೋದ ದಾರಿಯಲ್ಲಿ ಆತ ಹೋಗತೊಡಗಿದನು. ಹಳ್ಳಿಯ ಆ ನಿರ್ಜನ ಪ್ರದೇಶದಲ್ಲಿ ಆತನಿಗೆ ಯಾರೂ ಕಾಣಲಿಲ್ಲ. ಅಷ್ಟರಲ್ಲಿ ಹೊಳೆಯ ದಂಡೆಯಲ್ಲಿ ಎರಡು ಗುಡಿಸಲುಗಳು ಕಂಡವು. ಒಬ್ಬ ರೈತ ತನ್ನ ಮಗನ ಜತೆ ಆಲೂಗಡ್ಡೆಗಾಗಿ ಹೊಲದಲ್ಲಿ ತೆಗ್ಗುಗಳನ್ನು ಹಡ್ಡುತ್ತಿದ್ದದ್ದನ್ನು ಆತ ಕಂಡನು. .

ಎಷ್ಟೋ ಕಾಲದ ನಂತರ ಆತ ಇತರ ಮನುಷ್ಯಪ್ರಾಣಿಗಳ ಜತೆ ಮಾತನಾಡುವವನಿದ್ದನು. ಮುದುಕಿಯನ್ನು ಹುಡುಕುವ ಆಸೆಯ ಒತ್ತಡದಿಂದಾಗಿ ಆತ ಬಾಯಿ ಬಿಚ್ಚಿದನು. ತನ್ನ ಬಿರುಸಾದ ಗೊಗ್ಗರು ದನಿಯಲ್ಲಿ "ನರೆಗೂದಲಿನ, ಕಪ್ಪು ಬಟ್ಟೆ ಧರಿಸಿದ ಮುದುಕಿಯನ್ನು ನೀವೇನಾದರೂ ನೋಡಿದಿರಾ?" ಎಂದು ಕೇಳಿದನು.

"ಓಹ್, ನೀನು ಡೋನಾ ಜೋಸೆಫಾಳನ್ನು ಹುಡುಕುತ್ತಿದ್ದಂತೆ ಕಾಣುತ್ತದೆ," ರೈತನ ಮಗ ಹೇಳತೊಡಗಿದನು. ""ನಾವು ನೋಡಿದ್ದೇವೆ. ನಾವೇ ಅವಳನ್ನು ಈ ಮುಂಜಾನೆ ಗುಡಿಸಲಿನಿಂದ ನನ್ನ ಅಜ್ಜಿಯ ಮೇಲೆ ಉಪಚಾರ ಮಾಡಲು ಕರೆದುಕೊಂಡು —" .

ಅವನ ಮಾತನ್ನು ಅರ್ಧದಲ್ಲಿ ಕಡೆಯುತ್ತ, "ಈಗ ಅವಳೆಲ್ಲಿ?" ಎಂದು ಕೇಳಿದನು



"ಅವಳು ಇಲ್ಲಿಂದ ಹೋಗಿ ಸಾಕಷ್ಟು ವೇಳೆಯಾಯಿತು," ತಂದೆ ನಗುತ್ತ ಹೇಳಿದನು. "ಹೊಳೆಯ ಆ ದಂಡೆಯ ಮೇಲಿನವರು ಅವಳಿಗಾಗಿ ಬಂದಿದ್ದರು. ಅವರ ಮನೆಯಲ್ಲಿ ಯಾರಿಗೋ ಹುಶಾರಿಲ್ಲಂತೆ."

"ಹೊಳೆಯ ಆ ದಂಡೆಗೆ ನಾನು ಹೇಗೆ ಹೋಗಬೇಕು?" ಜುಆನ್ ಕೇಳಿದನು.

"ಕೇವಲ ದೋಣಿಯಿಂದ ಸಾಧ್ಯ, ” ಮಗ ಹೇಳಿದನು. "ಬೇಕಿದ್ದರೆ, ಆ ಮೇಲೆ, ನಾವು ನಿನ್ನನ್ನು ಆಚೆ ದಂಡೆಗೆ ತಲುಪಿಸಬಹುದು. " ಮಗ ತನ್ನ ಕೆಲಸ ಮಾಡತೊಡಗಿದನು. "ಆದರೆ ಮೊದಲು ಆಲೂಗಡ್ಡೆಗಳಿಗಾಗಿ ತೆಗ್ಗು ತೆಗೆಯುವ ಕೆಲಸ ಮುಗಿಯಬೇಕು. "

"ಧನ್ಯವಾದ." ಎಂದು ಹೇಳುತ್ತ ಕಳ್ಳ ತಲೆದೂಗಿದನು. ಆದರೆ ಆತ ತಾಳ್ಮೆಗೆಟ್ಟಿದ್ದನು. ಆ ಇಬ್ಬರು ಒಕ್ಕಲಿಗರಿಗೆ ಸಹಾಯ ಮಾಡಲೆಂದು ಅಲ್ಲಿಯೇ ಇದ್ದ ಸಲಿಕೆಯನ್ನು ತೆಗೆದುಕೊಂಡು ನೆಲ ಹಡ್ಡತೊಡಗಿದ. ಕೆಲಸ ಬೇಗ ಮುಗಿದರೆ ಹೊಳೆಯ ದಂಡೆಯನ್ನು ಬೇಗ ತಲುಪಬಹುದು ಮತ್ತು ಚಿನ್ನವನ್ನು ಕಬಳಿಸಬಹುದು ಎಂದು ಆತ ಲೆಕ್ಕ ಹಾಕಿರಬಹುದು.

ಸಂಜೆಯಾಗುತ್ತ ಬಂದಿತ್ತು. ಭೂಮಿ ಹದವಾಗಿತ್ತು. ಬುಟ್ಟಿ ತುಂಬ ಆಲೂಗಡ್ಡೆಗಳು ನೆಡಲು ಅಣಿಯಾಗಿದ್ದವು.

"ನಾವೀಗ ಹೊಳೆ ದಾಟಿ ಆ ದಂಡೆಗೆ ಹೋಗಬಹುದೇ?" ಜುಆನ್ ತಂದೆಯನ್ನು ಕಾತರದಿಂದ ಕೇಳಿದನು.

"ನಿಶ್ಚಿತವಾಗಿ," ಆತ ಹೇಳಿದನು. "ಆದರೆ ಮೊದಲು ಊಟ ಮಾಡುವ."

ಜುಆನ್ ನಿಗೆ ಮನೆಯೂಟದ ರುಚಿ ಮತ್ತು ಉಳಿದವರ ಜತೆ ಹಂಚಿಕೊಂಡಾಗ ಆಗುವ ಸಮಾಧಾನ ಇವುಗಳ ಪರಿಚಯವೇ ಇರಲಿಲ್ಲ. ಎಲೆಯಲ್ಲಿಯ ಸೂಪ ಮತ್ತು ಬ್ರೆಡ್ಡಿನ ತುಣುಕುಗಳನ್ನು ತಿನ್ನುವಾಗ ಯಾವದೋ ಒಂದು ಕಾಲದಲ್ಲಿ ಉಂಡ ಊಟದ ನೆನಪು ಬಂದಿತು.



ಬೆಳದಿಂಗಳ ಬೆಳಕಿನಲ್ಲಿ ತಂದೆ-ಮಗ ದೋಣಿಯನ್ನು ಹೊಳೆಯ ಆಚೆ ಬದಿಗೆ ತಲುಪಿಸಿದರು.
"ಡೋನಾ ಜೋಸೆಫಾ ಎಂತಹ ಒಳ್ಳೆಯ ವೈದ್ದಳು!" ಮಗ ಜುಆನ್ ಗೆ ಹೇಳುತ್ತಿದ್ದ.
"ಒಂದು ಅಬೇಲೊ ಬೇರು ಮತ್ತು ಅವಳು ಮಾಡಿದ ವಿಶಿಷ್ಟವಾದ ಒಂದು ಕಪ್ಪು ಚಹ ಕುಡಿದರೆ ಸಾಕು. ಬೇನೆ ಓಡಿಹೋಗುತ್ತದೆ."
"ಅಹುದು, ಇಷ್ಟೇ ಅಲ್ಲ," ತಂದೆ ಮುಂದೆವರಿಸಿದನು, "ಅವಳು ತನ್ನ ಜತೆ ಚಿನ್ನದ ನಾಣ್ಯ ಕೂಡ ಕೊಡಲು ತಂದಿದ್ದಳು"
ಜುಆನ್ ಅಚ್ಚರಿಗೊಂಡನು. ಡೋನಾ ಜೋಸೆಫಾ ರೋಗಿಗಳ ಉಪಚಾರ ಮಾಡಲು ಅವನ ಅಭ್ಯಂತರವಿಲ್ಲ. ಆದರೆ ಹೋದೆಡೆ ಚಿನ್ನದ ನಾಣ್ಯ ಹಂಚುವದು – ಅದೂ ಅವನ ನಾಣ್ಯಗಳನ್ನು?
ಕೊನೆಗೆ ಮೂವರು ಹೊಳೆಯ ಆ ದಂಡೆಯನ್ನು ತಲುಪಿದರು. ಆಲ್ಲಿಯ ಗುಡಿಸಲೆದುರಿಗೆ ಅವರಿಗೆ ಓರ್ವ ತರುಣ ಕಂಡನು.
"ಈತ ಡೋನಾ ಜೋಸೆಫಾಳನ್ನು ಕಾಣಲು ಬಂದಿದ್ದಾನೆ,". ಜುಆನ್ ಕಡೆ ಬೆರಳು ತೋರಿಸಿ ತಂದೆ ಹೇಳಿದನು.
"ಅವಳು ಇದೀಗಲೇ ಸ್ವಲ್ಪ ವೇಳೆ ಮೊದಲು ಹೊರಟು ಹೋದಳು," ಆ ತರುಣ ಹೇಳಿದ.
"ಎಲ್ಲಿ ಹೋದಳು?" ಅಳುಕುತ್ತ ಆತ ಕೇಳಿದನು.
"ಆ ದಿನ್ನೆಯ ಹಿಂಬದಿಗೆ," ರಾತ್ರಿಯ ಕತ್ತಲೆಯಲ್ಲಿ ಮುಗಿಲಿನೆತ್ತರದ ಯಾವದೋ ಗುಡ್ಡದೆಡೆ ಬೆರಳು ತೋರಿಸುತ್ತ ಹೇಳಿದ.
“ಅವಳು ಹೇಗೆ ಹೋದಳು?” ತನ್ನ ದನಿಯಲ್ಲಿಯ ಅಸಹನೆಯನ್ನು ಅಡಗಿಸುತ್ತ ಜುಆನ್ ಕೇಳಿದನು.
“ಕುದುರೆ ಮೇಲೆ ಕುಳಿತು,” ತರುಣ ಉತ್ತರಿಸಿದ. “ಅವರು ಕುದುರೆ ಮೇಲೆ ಕುಳಿತು ಬಂದಿದ್ದರು. ಯಾರದೋ ಕಾಲು ಮುರಿದಿದೆಯಂತೆ. ಅದನ್ನು ಸರಿಪಡಿಸಲು ಅವಳನ್ನು ಕರೆದುಕೊಂಡು ಹೋದರು.”
“ಹಾಗಿದ್ದರೆ ನನಗೂ ಕುದುರೆ ಬೇಕು,” ಜುಆನ್ ಹೇಳಿದ.



“ನಾಳೆ,” ತರುಣ ಮೆಲುದನಿಯಲ್ಲಿ ಹೇಳಿದನು. “ನಾಳೆ ಇಲ್ಲವೆ ನಾಡದು ನಾನು ಒಯ್ಯಬಹುದು. ನನಗೆ ಮೊದಲು ಬೆಳೆಯನ್ನು ಕೊಯ್ಯುವದಿದೆ.”

ಹೀಗೆ ಮರುದಿನದ ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಬೆವರು ಸುರಿಸುತ್ತ ಹೊಲದಲ್ಲಿ ಜುಆನ್ ದುಡಿದನು.

ತೆನೆಯಲ್ಲಿಯ ಒಂದೊಂದು ಕಾಳುಗಳನ್ನು ಕಂಡಂತೆ ಆತ ಸಂತಸ ಪಡೆಯುತ್ತಿದ್ದ. ರಾತ್ರಿಯ ಊಟಕ್ಕಾಗಿ ತೆನೆಗಳಲ್ಲಿಯ ಕಾಳುಗಳನ್ನು ಬೇರ್ಪಡಿಸುವಾಗ ಆ ಕಾಳುಗಳು ಚಿನ್ನದಂತೆ ಹೊಳೆಯುತ್ತಿವೆ ಎಂದು ಅವನಿಗೆ ಅನ್ನಿಸಿತು.

ಊಟ ಮಾಡುವಾಗ ಆತನು ಡೋನಾ ಜೋಸೆಫಾಳ ಬಗ್ಗೆನೇ ಯೋಚಿಸುತ್ತಿದ್ದನು. ಜಗತ್ತಿನಲ್ಲಿಯೇ ಹೆಚ್ಚು ಸಿರಿವಂತಳಿರುವವಳು ಹೀಗೇಕೆ ಸುತ್ತಮುತ್ತಲಿನ ಬೇನೆ ಬಿದ್ದವರ ಸೇವೆ ಮಾಡುತ್ತ ತನ್ನ ವೇಳೆಯನ್ನು ಹಾಳುಮಾಡುತ್ತಿದ್ದಾಳೆ?

ಮರುದಿನ ಬೆಳಗಿನಲ್ಲಿಯೇ ಇಬ್ಬರು ಹೊರಬಿದ್ದರು. ಆತನಿಗೆ ಸೂರ್ಯೋದಯದ ಸೌಂದರ್ಯವನ್ನೇ ಕಾಣದೇ ಎಷ್ಟೋ ದಿನಗಳಾಗಿದ್ದವು. ಗುಡ್ಡದಲ್ಲಿಂದ ಹೊರಬೀಳುವ ಸೂರ್ಯನನ್ನು ನೋಡಿ ಅವನ ಮೈನವಿರೇಳಿತು. ಬೆಳಗು ಮುಂಜಾನೆಯ  ಕಿರಣಗಳು ಗುಡ್ಡವನ್ನೇ ಬೆಳಗಿಸುತ್ತಿದ್ದವು.

ಅವರಿಬ್ಬರು ಗುಡ್ಡವನ್ನಿಳಿದು ಕೆಳಗೆ  ಬಂದಾಗ ತರುಣ ಹೇಳತೊಡಗಿದನು. “ನೀನು ಡೋನಾ ಜೋಸೆಫಾಳನ್ನು ಹುಡುಕುತ್ತ ಬಂದ ಬಗ್ಗೆ ನನಗೆ ಆಷ್ಚರ್ಯವೆನ್ನಿಸುವದಿಲ್ಲ. ಈ ಸುತ್ತಮುತ್ತಲಿನ ಎಲ್ಲ ಹಳ್ಳಿಗಳಿಗೂ ಅವಳು ಬೇಕಾದವಳು. ನನ್ನ ಹೆಂಡತಿಗೆ ಮೈ ಉರಿಯುವಷ್ಟು ಜ್ವರ ಏರಿದಾಗ ನಾನು ಅವಳನ್ನು ಕರೆದುಕಂಡು ಜೋಸೆಫಾಳ ಮನೆಗೆ ಹೋದೆ. ಮಾಟ ಮಾಡಿದಂತೆ ಕೆಲವೇ ಕ್ಷಣಗಳಲ್ಲಿ ಅವಳು ಜ್ವರವನ್ನು ಇಳಿಸಿದಳು. ಹೆಂಡತಿ ದಾರಿಯ ಮೇಲೆ ನಡೆಯತೊಡಗಿದಳು. ಇಷ್ಟೇ ಅಲ್ಲ, ಅವಳಿಗಾಗಿ ಚಿನ್ನದ ನಾಣ್ಯವನ್ನು ಕೂಡ ಅವಳು ತಂದಿದ್ದಳು!”



ಜುಆನ್ ಒಳಗಿಂದೊಳಗೆ ಮನದಲ್ಲಿ ಹಳಹಳಿಸಿದನು. ಹೀಗೆ ಚಿನ್ನವನ್ನು ಪುಕ್ಕಟೆಯಾಗಿ ಹಂಚುವದೇ! ಡೋನಾ ಜೋಸೆಫಾ, ಎಂತಹ ವಿಚಿತ್ರ ಮುದುಕಿ ಇದು, ಎಂದು ಯೋಚಿಸತೊಡಗಿದನು. ಬರಿ ಒಂದಾದ ಮೇಲೆ ಒಂದರಂತೆ ಜನರಿಗೆ ಸಹಾಯ ಮಾಡುವದಲ್ಲದೆ ಸಹಾಯ ಮಾಡುವದಕ್ಕಾಗಿ ಈ ಹಳ್ಳಿಗಾಡಿನಲ್ಲಿ ಅಡ್ಡಾಡಲು ಕೂಡ ಹಿಂಜರಿಯುವದಿಲ್ಲ!

"ಸರಿ, ಗೆಳೆಯ, " ತರುಣನು ಹೇಳತೊಡಗಿದನು. "ನಾನೀಗ ಮರಳಿ ಹೋಗಬೇಕು. ನಿನಗೆ ಅಷ್ಟೊಂದು ದೂರ ನಡೆಯಬೇಕಿಲ್ಲ. ಅಲ್ಲಿ ಒಂದು ಮನೆ ಕಾಣುತ್ತಿದೆಯೇ. ಅದೇ ಕಾಲು ಮುರಿದುಕೊಂಡವನ ಮನೆ. " .

ಹೋಗುವ ಮುನ್ನ ತರುಣನು ಕೈ ಕುಲುಕಲೆಂದು ಕೈ ಮುಂದೆ ಮಾಡಿದನು. ಜುಆನ್ ಒಂದು ಕ್ಷಣ ದಿಟ್ಟಿಸಿ ನೋಡಿದನು. ಅವನು ಯಾರ ಜತೆಗೂ ಕೈಕುಲುಕಿ ಎಷ್ಟೋ ವರುಷಗಳು ಉರುಳಿ ಹೋಗಿದ್ದವು. ತನ್ನ ಬೊಜ್ಜು ಹೊಟ್ಟೆಯ ಕೆಳಗಿನಿಂದ ಆತ ಮೆಲ್ಲಗೆ ಕೈ ಹೊರತಂದು ತರುಣನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಜುಆನ್ ನಿಗೆ ಬಿಸಿಲಿನ ಕಿರಣಗಳಂತೆ ಕೈ ಬೆಚ್ಚಗಾದಂತೆ ಅನ್ನಿಸಿತು.

ತರುಣನ ಕೈ ಕುಲುಕಿಯಾದ ಕೂಡಲೇ ಜುಆನ್ ಓಡುತ್ತಲೇ ಮನೆ ತಲುಪಿದನು. ಅವನು ಡೋನಾ ಜೋಸೆಫಾಳನ್ನು ಕಾಣಲು ತವಕಿಸುತ್ತಿದ್ದನು. ಮನೆ ಹತ್ತಿರ ಬಂದಾಗ ಒಬ್ಬ ಹೆಂಗಳೆ ಮತ್ತು ಅವಳ ಚಿಕ್ಕ ಮಗಳು ಜಟಕಾ ಬಂಡಿಯಿಂದ ಕೆಳಗೆ ಇಳಿಯುವದನ್ನು ಆತ ನೋಡಿದನು.

"ನೀವು ಡೋನಾ ಜೋಸೆಫಾಳನ್ನು ನೋಡಿದಿರಾ?" ಜುಆನ್ ಕೇಳಿದನು.

"ನಾವೀಗಲೇ ಅವಳನ್ನು ಡಾನ್ ಟಿಓಡೋಸಿಯೋನ ಕಡೆ ಬಿಟ್ಟು ಬಂದೆವು".ಹೆಂಗಸು ಹೇಳತೊಡಗಿದಳು, "ಅವನ ಹೆಂಡತಿಗೆ ಜ್ವರ—"

"ಅಲ್ಲಿಗೆ ಹೇಗೆ ಹೋಗಬೇಕು? ". ಜುಆನ್ ಬಾಯಿ ಬಿಟ್ಟನು. "ನನಗೆ ಅವಳನ್ನು ನೋಡಬೇಕು. "



"ನಡೆಯುತ್ತ ಹೋಗುವಷ್ಟು ಅದು ಸಮೀಪವಿಲ್ಲ, ". ಹೆಂಗಸು ಮೆಲುದನಿಯಲ್ಲಿ ಹೇಳತೊಡಗಿದಳು. "ಬೇಕಿದ್ದರೆ ನಾನು ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವೇ. ಆದರೆ ಮೊದಲು ನಾನು ನನ್ನ ಅವರೆಕಾಯಿ ಮತ್ತು ಸೀಮೆಬದನೆಕಾಯಿಗಳನ್ನು ಬಿಡಿಸಿ ಗುಂಪು ಹಾಕಬೇಕು. "

ಹೀಗೆ ಜುಆನ್ ಮತ್ತೊಂದು ದಿನವನ್ನು ಹೊಲಗೆಲಸದಲ್ಲಿ ಕಳೆಯಬೇಕಾಯಿತು. ಬಿಸಿಲಲ್ಲಿ ಕೆಲಸ ಮಾಡುತ್ತಿದ್ದಂತೆ ಅವನ ತ್ವಚೆಯ ಬಣ್ಣ ಬದಲಾಗತೋಡಗಿತು. ಟೊಂಕವನ್ನು ಸಾಕಷ್ಟು ಬಗ್ಗಿಸಲಿಕ್ಕೆ ಆಗದಿದ್ದರೂ  ಅವನಿಗೆ ಶರೀರವನ್ನು ಬಗ್ಗಿಸುವದು ಸಾಧ್ಯ ಎಂದು ಅನ್ನಿಸತೊಡಗಿತು. ಬೆನ್ನನ್ನು ಕೂಡ ನೇರವಾಗಿ ಇಡಲು ಸಾಧ್ಯವಾಯಿತು.

ಆ ಮೇಲೆ ಚಿಕ್ಕ ಮಗಳು ಅವನ ಕೈ ಹಿಡಿದು ಮೊಲಗಳ ಕುಟುಂಬದ ಬಿಲವನ್ನು ತೋರಿಸಲು ಕರೆದುಕೊಂಡು ಹೋದಳು. ಆ ಬಿಲದ ಮೇಲೆ ಗಿಡದ ಟೊಂಗೆ ಬಿದ್ದಿತ್ತು. ಜುಆನ್ ಮುಗುಳು ನಕ್ಕನು. ಎಷ್ಟೋ ವರುಷಗಳ ನಂತರ ಆತ ಹೀಗೆ ನಕ್ಕದ್ದು. ಆದರೂ ಅವನ ತಲೆಯಲ್ಲಿ ಚಿನ್ನದ ನಾಣ್ಯದ ವಿಚಾರ ತುಂಬಿತ್ತು.

ಮರುದಿನ ಜುಆನ್ ಮತ್ತು ಆ ಹೆಂಗಸು ಜಟಕಾ ಬಂಡಿಯಲ್ಲಿ ಕುಳಿತು ಕಾಫೀ ತೋಟಗಳ ನಡುವಿನ ದಾರಿಯಿಂದ ಹೋಗತೊಡಗಿದರು.

ಹೆಂಗಸು ಹೇಳತೊಡಗಿದಳು. "ಡೋನಾ ಜೋಸೆಫಾ ಇರದೇ ಹೋಗಿದ್ದರೆ ನಾವೇನು ಮಾಡುತ್ತಿದ್ದೆವೋ ನಾನು ಊಹಿಸಲಾರೆ. ನಾನು ನನ್ನ ಮಗಳನ್ನು ಮಗ್ಗಲು ಮನೆಗೆ ಕಳಿಸಿಕೊಟ್ಟೆ. ಅವರು ಕೂಡಲೇ ಡೋನಾ ಜೋಸೆಫಾಳನ್ನು ಜಟಕಾ ಬಂಡಿಯಲ್ಲಿ ಕೂಡಿಸಿ ಇಲ್ಲಿಗೆ ಕರೆದುಕೊಂಡು ಬಂದರು. ಅವಳು ನನ್ನ ಗಂಡನ ಮುರಿದ ಕಾಲನ್ನು ಸರಿಯಾಗಿ ಕೂಡಿಸಿದಳು. ಮತ್ತು ನೋವನ್ನು ಕಡಿಮೆ ಮಾಡುವ ಕಷಾಯವನ್ನು ತಯಾರಿಸುವ ಬಗೆ ಹೇಳಿಕೊಟ್ಟಳು."

ಅವನಿಂದ ಉತ್ತರ ಬರಲಿಲ್ಲವೆಂದು ಅವಳು ಮುಂದುವರಿಸಿದಳು  "ಇಷ್ಟೇ ಅಲ್ಲ, ತನ್ನ ಜತೆ ಚಿನ್ನದ ನಾಣ್ಯವನ್ನು ಕೂಡ ತಂದಿದ್ದಳು. ಇದೆಲ್ಲವನ್ನು ನಿನಗೆ ಊಹಿಸಲು ಸಾಧ್ಯವೇ?"



ಜುಆನ್ ನಿಟ್ಟುಸಿರು ಬಿಟ್ಟನು. ಡೋನಾ ಜೋಸೆಫಾ ಇವಳೊಬ್ಬಳು ವಿಶೇಷ ಹೆಂಗಸು ಎಂದು ಅವನಿಗೆ ಮನದಟ್ಟಾಯಿತು. ಆದರೆ ಇದರಿಂದ ಸಮಾಧಾನ ಪಡೆಯಬೇಕೋ ಇಲ್ಲವೆ ಅವಳ ಹತ್ತಿರ ಇಷ್ಟೊಂದು ಚಿನ್ನವಿದ್ದು ಅದನ್ನು ಅವಳು ಹಂಚುತ್ತ ಹೋಗುತ್ತಾಳೆಂದು ಸಿಟ್ಟಿಗೇಳಬೇಕೋ ಎಂಬುದರ ಬಗ್ಗೆ ಅವನ ಮನದಲ್ಲಿ ಹೊಯ್ದಾಟ.

ಕೊನೆಯಲ್ಲಿ ಅವರು ಡಾನ್ ಟಿಓಡೋಸಿಯೋನ ಮನೆ ಮುಟ್ಟಿದಾಗ ಡೋನಾ ಜೋಸೆಫಾ ಹೋಗಿಬಿಟ್ಟದ್ದಳು. ಆದರೆ ಇಲ್ಲಿಯೂ ಅವನಿಗೆ ಕೆಲಸ ಮಾಡಬೇಕಾಯಿತು...

ಜುಆನ್ ಇಲ್ಲಿ ಕಾಫಿಯ ಕಟಾವು ಮಾಡಬೇಕಾಯಿತು. ಗುಡ್ಡಗಳ ಮೇಲೆ ಸಾಲಾಗಿ ನೆಟ್ಟಿರುವ ಗಿಡಗಳ ಮೇಲೆ ಬೆಳೆಯುತ್ತಿರುವ ಕಂದು ಬೀಜಗಳನ್ನು ಆತನು ವೀಕ್ಷಿಸಿದನು. ಎಷ್ಟೊಂದು ಅಂದದ ನೋಟವೆಂದು ಅವನಿಗೆ ಅನ್ನಿಸಿತು.

ಮರುದಿನ ಬೆಳಿಗ್ಗೆ ಎದ್ದನು. ಮುಂಜಾನೆಯ ಮಂದ ಪ್ರಕಾಶದಲ್ಲಿ ಸ್ನಾನ ಮಾಡುತ್ತಿದ್ದಂತೆ ಅವನಿಗೆ ಅನ್ನಿಸಿತು. ಸುತ್ತಮುತ್ತಲಿನ ದಿನ್ನೆಗಳು ಮುಗುಳು ನಗುತ್ತವೆಂದು ಅವನಿಗೆ ಅನ್ನಿಸತೊಡಗಿತು. ಟಿಓಡೋಸಿಯೋನ ಜತೆ ಕುದುರೆ ಮೇಲೆ ಕುಳಿತಾಗ ಅವನನ್ನು ಬೀಳ್ಕೊಡುವದು ಕಷ್ಟಮಯವಾಯಿತು.

"ಡೋನಾ ಜೋಸೆಫಾ ಎಂತಹ ಒಳ್ಳೆಯ ಹೆಂಗಸು!" ದಿನ್ನೆಯ ಮೇಲಿನ ಕಬ್ಬಿನ ತೋಟಗಳನ್ನು ದಾಡುತ್ತಿದ್ದಾಗ, ಡಾನ್ ಟಿಓಡೋಸಿಯೋ ಹೇಳತೊಡಗಿದನು. "ನನ್ನ ಹೆಂಡತಿಗೆ ಹುಷಾರಿಲ್ಲವೆಂಬ ಸುದ್ದಿ ತಿಳಿದ ಕ್ಷಣ ಅವಳು ವಿಶಿಷ್ಟ ಮದ್ದನ್ನು ತೆಗೆದುಕೊಂಡು ಬಂದಳು. ಅಷ್ಟೇ ಅಲ್ಲ, ನನ್ನ ಹೆಂಡತಿಗಾಗಿ ಚಿನ್ನದ ನಾಣ್ಯ ಕೂಡ ತಂದಳು!"

ಉರಿಬಿಸಿಲಿನಲ್ಲಿ ಬಿರುಗಾಳಿಯಲ್ಲಿ ಸಿಕ್ಕಂತೆ ಆತನು ಬೆವತನು. ತನ್ನ ಕಣ್ಣಿನ ರೆಪ್ಪೆಗಳ ಮೇಲಿನ ಬೆವರನ್ನು ಒರೆಸತೊಡಗಿದನು. ಇಬ್ಬರು ತೆಪ್ಪಗೆ ಒಂದೆರಡು ಗಂಟೆ ಪ್ರಯಾಣ ಮಾಡಿದರು.

ಸುತ್ತಲು ನೋಡಿದಾಗ ಜುಆನ್ ನಿಗೆ ತನ್ನ ಪರಿಚಿತ ಪ್ರದೇಶವೆಂದು ಅನ್ನಿಸತೊಡಗಿತು. ಒಂದು ವಾರದ ಹಿಂದೆ ಇದೇ ಪ್ರದೇಶಗಳಲ್ಲಿ ತಾನು ಅಡ್ಡಾಡಿದ ನೆನಪು ಬಂದಿತು. ಒಂದು ವಾರ ಕೂಡ ಸಾಕಷ್ಟು ದಿನಗಳಾದವು ಎಂದೆನ್ನಿಸತೊಡಗಿತು. ಆತ ಕುದುರೆಯಿಂದ ಇಳಿದು ಓಡತೊಡಗಿದನು.

ಈ ಸಲ ಅವನ ಚಿನ್ನ ಮಾಯವಾಗಕೂಡದು. ಅದಕ್ಕಾಗಿ ಆತ ಬೇಗನೆ ಹೋಗಲೇಬೇಕು. ಬಿರುಗಾಳಿ ಬೀಸುವ ಮೊದಲೆ ಮನೆ ಮುಟ್ಟಬೇಕು.

ಸಾಕಷ್ಟು ದಣಿವಾದ ಮೇಲೆ ಆತ ಡೋನಾ ಜೋಸೆಫಾನ ಗುಡಿಸಲು ಮುಟ್ಟಿದನು. ಅವಳು ಬಾಗಿಲಲ್ಲಿಯೇ ನಿಂತು ಹಾಳಾದ ಗುಡಿಸಲನ್ನು ನೋಡುತ್ತಿದ್ದಳು.

"ಕೊನೆಯಲ್ಲಿ ನೀನು ನನ್ನ ಕೈಗೆ ಸಿಕ್ಕಿ ಬಿದ್ದೆ!" ಜುಆನ್ ಗಡಸು ದನಿಯಲ್ಲಿ ಕೇಳಿದನು "ಚಿನ್ನವೆಲ್ಲಿದೆ?"

"ಆ ಚಿನ್ನದ ನಾಣ್ಯವೇ!" ಡೋನಾ ಜೋಸೆಫಾ ಅಚ್ಚರಿಯಾದ ದನಿಯಲ್ಲಿ ಅವನನ್ನು ನೋಡುತ್ತ ಸೋಜಿಗಗೊಂಡು ಕೇಳಿದಳು. "ಅದಕ್ಕಾಗಿ ಇಲ್ಲಿಗೆ ಬಂದೆಯಾ? ನಾನೇ ಯಾರಿಗೆ ಅವಶ್ಯಕತೆ ಇದೆಯೋ ಅವರಿಗೆ ಕೊಡಬೇಕೆಂದು ಸಾಕಷ್ಟು ಪ್ರಯತ್ನಿಸುತ್ತಿದ್ದೆ. " ಡೋನಾ ಹೇಳತೊಡಗಿದಳು. "ಮೊದಲು ಬೇನೆಯಿಂದ ಬಳಲುವ ಆ ವಯಸ್ಸಾದ ಮುದುಕನಿಗೆ, ಆ ಮೇಲೆ ಜ್ವರದಿಂದ ಬಳಲಿದ ಆ ಹೆಂಗಸಿಗೆ.ನಂತರ ಕಾಲು ಮುರಿದು ಬಿದ್ದ ತರುಣನಿಗೆ. ಕೊನೆಯಲ್ಲಿ ಟಿಓಡೋಸಿಯೋನ ಹೆಂಡತಿಗೆ. ಆದರೆ ಅವರೆಲ್ಲರು ನೀನೇ ಇಟ್ಟಿಕೋ. ಯಾರಿಗೆ ಅವಶ್ಯಕತೆ ಇದೆ, ಅವರಿಗೆ ಕೊಡು ಎಂದು ಹೇಳಿದರು."

ಜುಆನ್ ಪಿಟ್ಟೆನ್ನಲಿಲ್ಲ.

"ನಿನಗೇನೆ ಇದರ ಆವಶ್ಯಕತೆ ಇದ್ದಂತೆ ಕಾಣುತ್ತದೆ," ಡೋನಾ ಹೇಳಿದಳು



ಜೇಬಿನಿಂದ ನಾಣ್ಯವನ್ನು ಹೊರತೆಗೆದು ಅವನ ಅಂಗೈಯ ಮೇಲಿಟ್ಟಳು. ಜುಆನ್ ದಿಬ್ಬಾಗಿ ಮಾತನ್ನಾಡದೆ ಆ ನಾಣ್ಯವನ್ನು ನೋಡತೊಡಗಿದನು.

ಅದೇ ಗಳಿಗೆಯಲ್ಲಿ ತನ್ನ ಎರಡು ಹೆರಳುಗಳನ್ನು ಪುಟಿದಾಡಿಸುತ್ತ ಒಂದು ಚಿಕ್ಕ ಹುಡುಗಿ ಬಂದಳು. "ಡೋನಾ ಜೋಸೆಫಾ, ಅವಸರ ಮಾಡು!" ಉಸಿರು ಬಿಡದೇ ಅವಳು ಹೇಳತೊಡಗಿದಳು. "ನನ್ನ ತಾಯಿ ಒಬ್ಬಳೇ ಮನೆಯಲ್ಲಿದ್ದಾಳೆ. ಹೊಟ್ಟೆಯಲ್ಲಿಯ ಕೂಸು ಯಾವದೇ ಕ್ಷಣ ಹೊರಬರಬಹುದು.".

"ನಿಶ್ಚಿತವಾಗಿ, ಮಗಳೇ" ಡೋನಾ ಉತ್ತರಿಸಿದಳು. ಆದರೆ ಅವಳು ಮುಗಿಲುಕಡೆ ನೋಡತೊಡಗಿದಳು.ಆಕಾಶದಲ್ಲಿ ಕೇವಲ ಕಾರ್ಮೋಡುಗಳು ಕಾಣುತ್ತಿದ್ದವು. ಯಾವದೇ ಗಳಿಗೆಯಲ್ಲಿ ಮುಗಿಲು ಹರಿದು ಬಿದ್ದಂತೆ ಬಿರುಗಾಳಿ ಬರಬಹುದು. ಡೋನಾ ನಿಟ್ಟುಸಿರು ಬಿಟ್ಟಳು.

"ನಾನೀಗ ಹೇಗೆ ಬರಲು ಸಾಧ್ಯ. ನನ್ನ ಮನೆ ನೋಡು. ಮಾಳಿಗೆಗೆ ಏನಾಯಿತು ಎಂಬುದು ನನಗೆ ಗೊತ್ತಿಲ್ಲ. ಬಿರುಗಾಳಿ ನನ್ನ ಮನೆಯನ್ನೇ ತತ್ತರಿಸಬಹುದು!". ಅವಳ ದನಿಯಲ್ಲಿ ನೋವು ಇತ್ತು.

ಜುಆನ್ ನಿಗೆ ಆ ಚಿಕ್ಕ ಹುಡುಗಿಯ ಕಣ್ಣಲ್ಲಿಯ ಅಳುವು ಕಾಣುತ್ತಿತ್ತು. ಡೋನಾಳ ಮುಖದ ಮೇಲೆ ನೋವು ಮತ್ತು ಎದುರಿಗೆ ಹಾಳು ಬಿದ್ದ ಗುಡಿಸಲು.

"ಡೋನಾ ಜೋಸೆಫಾ, ನೀವೀಗ ಕೂಡಲೇ ಹೊರಡಿ." ಆತ ಹೇಳಿದನು. "ನೀವು ಈ ಮನೆ ಬಗ್ಗೆ ಚಿಂತಿಸಬೇಡಿ. ನೀವು ಮರಳಿ ಬರುವದರಲ್ಲಿ ಚಪ್ಪರವನ್ನು ಹೊದಿಸಿ ಮನೆಯನ್ನು ಹೊಸ ಮನೆ ಕಂಡಂತೆ ಮಾಡುವೆ."

ಡೋನಾ ತಲೆದೂಗಿದಳು. ತನ್ನ ಬಟ್ಟೆಗಳನ್ನು ಮೈಮೇಲೆ ಸುತ್ತಿಕೊಂಡು ಆ ಹುಡುಗಿಯ ಬೆರಳನ್ನು ಹಿಡಿದು ಹೊರಬಿದ್ದಳು.

ಅಷ್ಟರಲ್ಲಿ "ಈ ನಾಣ್ಯವನ್ನು ತೆಗೆದುಕೊಳ್ಳಿ. ," ಆತ ತನ್ನ ಅಂಗೈಯಲ್ಲಿಯ ನಾಣ್ಯವನ್ನು ತಿರುಗಿ ಕೊಡುತ್ತ ಹೇಳಿದನು. "ನನಗಿಂತ ಹೆಚ್ಚು ಆ ಹುಟ್ಟುವ ಹಸುಗೂಸಿಗೆ ಇದರ ಅವಶ್ಯಕತೆ ಇದೆ."

ಮುಕ್ತಾಯ

# ಚಿನ್ನದ ನಾಣ್ಯ

## ಅಲ್ಮಾ ಫ್ಲೋರ್ ಅಡಾ ಜತೆ ಮಾತುಕತೆ

Meet

Alma Flor Ada





"ನನ್ನ ಎಷ್ಟೋ ಕತೆಗಳನ್ನು ನಾನು ಬರೆಯವದಕ್ಕಿಂತ ಮೊದಲೇ ಹೇಳಿಯಾಗಿತ್ತು", ಅಲ್ಮಾ ಫ್ಲೋರ್ ಅಡಾ ಹೇಳತೊಡಗಿದಳು, "ಆಮೇಲೆನೆ ಉಳಿದ ಜನ ಅವುಗಳನ್ನು ಕೇಳಿ ಅವುಗಳಲ್ಲಿ ರುಚಿ ತೋರಿಸಿದ ಮೇಲೆ ನನಗೆ ಬರೆಯಲು ಪ್ರೇರಣೆ ದೊರಕಿತು.

ಇನ್ನುಳಿದ ಜನರ ಕತೆಗಳನ್ನು ಆಲಿಸಿದ್ದರಿಂದಲೂ ಅಡಾಳಿಗೆ ಬರೆಯಬೇಕೆಂದು ಅನ್ನಿಸಿರಬೇಕು. ಚಿನ್ನದ ನಾಣ್ಯದ ಕತೆಯನ್ನು ಅವಳು ತನ್ನ ಹದಿನೈದರ ಚಿಕ್ಕ ವಯಸ್ಸಿನಲ್ಲಿ ತನ್ನ ಅಜ್ಜಿಯಿಂದ ಕೇಳಿರಬಹುದು. ಈ ಕತೆಯಲ್ಲಿ ಓರ್ವ ಸಿರಿವಂತನು ತನ್ನ ಸಂಪತ್ತನ್ನು ಉಳಿಸಿಕೊಳ್ಳಬೇಕೋ ಇಲ್ಲವೆ ತನ್ನ ಬಳಲುತ್ತಿರುವ ಪತ್ನಿಯ ಜತೆ ಕೊನೆ ಗಳಿಗೆಯವರೆಗೆ ಇರಬೇಕೊ ಎಂಬ ಇಕ್ಕಟ್ಟಿನಲ್ಲಿ ಸಿಕ್ಕು ಬಿದ್ದಿದ್ದನು. ಈತ ಅಲ್ಮಾ ಫ್ಲೋರ್ ಅಡಾಳ ಮುತ್ತಜ್ಜ. "ತಾನು ಹೆಂಡತಿಯ ಜತೆ ಕೊನೆಗಳಿಗೆಯವರೆಗೆ ಇದ್ದುದಕ್ಕೆ ಎಂದೂ ವಿಷಾದಿಸಲಿಲ್ಲ. ಸಂಪತ್ತು ನಿಮ್ಮನ್ನು ಆಳಕೂಡದು." ಎಂದು ಅವಳಿಗೆ ಹೇಳುತ್ತಿದ್ದನು.

ಅಲ್ಮಾ ಫ್ಲೋರ್ ಅಡಾ ಕ್ಯುಬಾದಲ್ಲಿ ಹುಟ್ಟಿ ಬಂದವಳು. ಈಗ ಕ್ಯಾಲಿಫೋರ್ನಿಯಾದಲ್ಲಿ ವಾಸಿಸುತ್ತಿದ್ದಾಳೆ. ಸ್ಯಾನ್ ಫ್ರಾನ್ಸಿಸ್ಕೊ ವಿದ್ಯಾಪೀಠದಲ್ಲಿ ಬಹುಸಂಸ್ಕೃತಿ ಶಿಕ್ಷಣ ಕೊಡುತ್ತಿದ್ದಾಳೆ. ಅವಳು ಚಿಕ್ಕ ಮಕ್ಕಳಿಗಾಗಿ ಸಾಕಷ್ಟು ಪುಸ್ತಕಗಳನ್ನು ಬರೆದಿದ್ದಾಳೆ. ಅವು ಅರ್ಜೆಂಟಿನಾ, ಪೇರು,